# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 478(749) |
| ಸದಸ್ಯರ ಹೆಸರು | : | ಶ್ರೀ ಎನ್.ಎಸ್ ಬೋಸ್‌ರಾಜು (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 10-03-2020 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಗೆ ಮತ್ತು ರೇಷ್ಮೆ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಯಚೂರು ನಗರಸಭೆಯಲ್ಲಿ 14ನೇ ಹಣಕಾಸಿನ ವಾರ್ಡ್‌ವಾರು ವಿವಿಧ ಅಭಿವೃದ್ಧಿ ಕಾಮಗಾರಿಗಳ ಟೆಂಡರ್ ಪ್ರಕ್ರಿಯೆ ಪೂರ್ಣಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಸರ್ಕಾರ ತೆಗೆದುಕೊಂಡ ಕ್ರಮಗಳೇನು; | • 14ನೇ ಹಣಕಾಸು ಆಯೋಗದ ಅನುದಾನದಡಿ ರಾಯಚೂರು ನಗರಸಭೆಗೆ 2015-16ನೇ ಸಾಲಿನಿಂದ 2019-20ನೇ ಸಾಲಿನ ವರೆಗೆ ಒಟ್ಟು ಅನುದಾನ ರೂ.5866.89 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿದೆ.<br>• 2017-18ರಿಂದ 2019-20ನೇ ಸಾಲಿನ ವರೆಗೆ ರೂ.1444.14 ಲಕ್ಷಗಳ 144 ಕಾಮಗಾರಿಗಳು ಟೆಂಡರ್ ಪ್ರಕ್ರಿಯೆಯಲ್ಲಿರುತ್ತವೆ.<br>ಮೇಲ್ಕಂಡ ಅನುದಾನಗಳಡಿ ಕೈಗೊಂಡ ಕಾಮಗಾರಿಗಳ ಟೆಂಡರ್ ಪ್ರಕ್ರಿಯೆಯು ವಿಳಂಬವಾಗಿರುವುದನ್ನು ಗಮನಿಸಿದ್ದು, ಮಾರ್ಚ್ 15, 2020ರ ಒಳಗಾಗಿ ಟೆಂಡರ್ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು, ಜಿಲ್ಲೆಯ ಯೋಜನಾ ನಿರ್ದೇಶಕರಿಗೆ ಸೂಚನೆ ನೀಡಲಾಗಿದ್ದು, ಈ ಬಗ್ಗೆ ಪ್ರತಿ ಮಾಹೆ ಪ್ರಗತಿ ಪರಿಶೀಲನೆ ನಡೆಸಲಾಗುತ್ತಿದೆ. |
| ಆ) | ನಗರಸಭೆ, ಪುರಸಭೆ ಹಾಗೂ ಪಟ್ಟಣ ಪಂಚಾಯಿತಿಗಳ ಸದಸ್ಯರುಗಳ ಚುನಾವಣೆ ಮುಗಿದು ಒಂದು ವರ್ಷ ಕಳೆದರೂ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆ ಆಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದಲ್ಲಿ ಸರ್ಕಾರ ತೆಗೆದುಕೊಂಡ ಕ್ರಮಗಳೇನು. | ಬಂದಿದೆ.<br>ರಾಜ್ಯದ ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳ 9ನೇ ಅವಧಿಗೆ ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮೀಸಲಾತಿಯನ್ನು ಸಂಖ್ಯೆ:ನಅಇ 82 ಎಂಎಲ್‌ಆರ್ 2018(1)(2)(3), ದಿನಾಂಕ:03.09.2018ರಲ್ಲಿ ನಿಗದಿಪಡಿಸಿ ಅಧಿಸೂಚನೆ ಹೊರಡಿಸಲಾಗಿತ್ತು. ಈ ಮೀಸಲಾತಿ ಅಧಿಸೂಚನೆಗಳನ್ನು ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು/ ಧಾರವಾಡ/ಕಲಬುರ್ಗಿ ಇಲ್ಲಿ ಪ್ರಶ್ನಿಸಿದ್ದು, ಧಾರವಾಡ ಪೀಠವು ರಿಟ್ ಅರ್ಜಿ ಸಂಖ್ಯೆ:105750-754/2018 ಹಾಗೂ ಇತರೇ ಪ್ರಕರಣಗಳಲ್ಲಿ ದಿನಾಂಕ:10.09.2018ರಂದು ತಡೆಯಾಜ್ಞೆ ನೀಡಲಾಗಿತ್ತು.<br>ನ್ಯಾಯಾಲಯದಲ್ಲಿ ಪ್ರಕರಣ ದಾಖಲಾಗಿ, ತಡೆಯಾಜ್ಞೆ ಇದ್ದುದ್ದರಿಂದ ರಾಜ್ಯದ ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳ ಅಧ್ಯಕ್ಷರು ಮತ್ತು ಉಪಾಧ್ಯಕ್ಷರು ಸ್ಥಾನಗಳಿಗೆ ಚುನಾವಣೆ ನಡೆಸಲು ಸಾಧ್ಯವಾಗಿರುವುದಿಲ್ಲ.<br>ಮುಂದುವರೆದು, ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ದಾಖಲಾಗಿದ್ದ ರಿಟ್ ಅರ್ಜಿ ಸಂಖ್ಯೆ:47171/2018 c/w ಇತರೇ ಪ್ರಕರಣಗಳಲ್ಲಿ ನ್ಯಾಯಾಲಯವು ದಿನಾಂಕ:18.01.2019ರಂದು ನೀಡಲಾದ ತೀರ್ಪಿನಲ್ಲಿ ರಿಟ್ ಅರ್ಜಿಯನ್ನು ವಜಾಗೊಳಿಸಿರುತ್ತದೆ. ಸದರಿ ತೀರ್ಪನ್ನು ಪ್ರಶ್ನಿಸಿ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅಪೀಲು ಸಂಖ್ಯೆ:157-176/2019 c/w ಇತರೇ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣವು ಅಂತಿಮವಾಗಿ ದಿನಾಂಕ:07.11.2019ರಂದು ವಿಚಾರಣೆಗೆ ಬಂದು ಸರ್ಕಾರದ ಪರ ಹಾಜರಾದ ಅಡ್ವೋಕೇಟ್ ಜನರಲ್‌ರವರು ದಿನಾಂಕ:03.09.2018ರಂದು ಹೊರಡಿಸಲಾದ ಅಧಿಸೂಚನೆಗಳನ್ನು ಹಿಂಪಡೆದು ಹೊಸದಾಗಿ ಮಾರ್ಗಸೂಚಿಗಳನ್ನು ಅನುಸರಿಸಿ ಒಂದು ತಿಂಗಳೊಳಗೆ ಅಧ್ಯಕ್ಷ ಮತ್ತು |

| | | |
|---|---|---|
| | | ಉಪಾಧ್ಯಕ್ಷ ಸ್ಥಾನಗಳಿಗೆ ಮೀಸಲಾತಿ ನಿಗದಿಪಡಿಸಿ ಅಧಿಸೂಚ. ಹೊರಡಿಸಲಾಗುವುದೆಂದು ಹೇಳಿಕೆಯನ್ನು ಸಲ್ಲಿಸಿದ್ದು, ಈ ಹೇಳಿಕೆಯನ್ನು ಪರಿಗಣಿಸಿ ಮಾನ್ಯ ಉಚ್ಚ ನ್ಯಾಯಾಲಯವು ಪ್ರಕರಣವನ್ನು ವಿಲೇವಾರಿ ಮಾಡಿರುತ್ತದೆ.<br><br>ರಿಟ್ ಅಪೀಲು ಸಂಖ್ಯೆ:157-176/2019 c/w ಇತರೇ ಪ್ರಕರಣಗಳಲ್ಲಿ ದಿನಾಂಕ:07.11.2019ರಂದು ಮಾನ್ಯ ನ್ಯಾಯಾಲಯವು ಅಡ್ವೊಕೇಟ್ ಜನರಲ್‌ರವರ ಹೇಳಿಕೆಯನ್ನು ಪರಿಗಣಿಸಿ ಪ್ರಕರಣವನ್ನು ಇತ್ಯರ್ಥಗೊಳಿಸಿದ್ದು, ಆ ಪ್ರಕಾರ ದಿನಾಂಕ:03.09.2018ರ ಅಧಿಸೂಚನೆಯನ್ನು ದಿನಾಂಕ: 06.02.2020ರಂದು ಹಿಂಪಡೆಯಲಾಗಿದೆ.<br><br>ಈ ಮಧ್ಯೆ, ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು ಇಲ್ಲಿ ದಾಖಲಾಗಿರುವ ರಿಟ್ ಅರ್ಜಿ ಸಂಖ್ಯೆ:2356/2020 ಪ್ರಕರಣದಲ್ಲಿ ಅರ್ಜಿದಾರರು ದಿನಾಂಕ:03.09.2018ರ ಅಧಿಸೂಚನೆಯನ್ವಯ ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಚುನಾವಣೆ ನಡೆಸಲು ನಿರ್ದೇಶನ ನೀಡುವಂತೆ ನ್ಯಾಯಾಲಯದಲ್ಲಿ ದಾವೆ ಹೂಡಿರುತ್ತಾರೆ.<br><br>ಈ ಪ್ರಕರಣದಲ್ಲಿ ಮಾನ್ಯ ನ್ಯಾಯಾಲಯವು ದಿನಾಂಕ:26.02.2020ರಂದು ವಿಚಾರಣೆ ನಡೆಸಿ, ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮಾರ್ಗಸೂಚಿಗಳನ್ನು ಅನುಸರಿಸಿ ಹೊಸದಾಗಿ ಮೀಸಲಾತಿ ಅಧಿಸೂಚನೆಗಳನ್ನು ಹೊರಡಿಸಲು ಕೈಗೊಂಡಿರುವ ಕ್ರಮದ ಬಗ್ಗೆ ದಾಖಲೆಗಳನ್ನು ಮಾನ್ಯ ಉಚ್ಚ ನ್ಯಾಯಾಲಯಕ್ಕೆ ಸಲ್ಲಿಸುವಂತೆ, ಅಲ್ಲಿಯವರೆಗೆ ಮೀಸಲಾತಿ ಅಧಿಸೂಚನೆಗಳನ್ನು ಹೊರಡಿಸಬಾರದೆಂದು ನ್ಯಾಯಾಲಯವು ನಿರ್ದೇಶನ ನೀಡಿ, ಪ್ರಕರಣವನ್ನು ಮುಂದಿನ ವಿಚಾರಣೆಯನ್ನು ದಿನಾಂಕ:09.03.2020ಕ್ಕೆ ನಿಗದಿಪಡಿಸಿರುತ್ತದೆ. ಮಾನ್ಯ ಉಚ್ಚ ನ್ಯಾಯಾಲಯದ ನಿರ್ದೇಶನದ ಹಿನ್ನೆಲೆಯಲ್ಲಿ ಅಧ್ಯಕ್ಷರು ಹಾಗೂ ಉಪಾಧ್ಯಕ್ಷರ ಸ್ಥಾನಗಳಿಗೆ ಹೊಸದಾಗಿ ಮೀಸಲಾತಿ ನಿಗದಿಪಡಿಸಿ ಅಧಿಸೂಚನೆ ಹೊರಡಿಸಲು ಸಾಧ್ಯವಾಗಿರುವುದಿಲ್ಲ.<br><br>ಮಾನ್ಯ ಉಚ್ಚ ನ್ಯಾಯಾಲಯದ ಆದೇಶದನ್ವಯ ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯತಿಗಳ 9ನೇ ಅವಧಿಯ ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸ್ಥಾನಗಳಿಗೆ ಮೀಸಲಾತಿ ಅಧಿಸೂಚನೆಯನ್ನು ಹೊಸದಾಗಿ ಹೊರಡಿಸಲು ಕ್ರಮಕೈಗೊಳ್ಳಲಾಗುತ್ತಿದ್ದು, ಶೀಘ್ರದಲ್ಲಿಯೇ ನಿಯಮಾನುಸಾರ ಚುನಾವಣೆ ನಡೆಸಲು ಅಗತ್ಯ ಕ್ರಮ ಕೈಗೊಳ್ಳಲಾಗುವುದು.<br><br>ನಗರ ಸ್ಥಳೀಯ ಸಂಸ್ಥೆಗಳ ದಿನನಿತ್ಯದ ಕೆಲಸ-ಕಾರ್ಯಗಳಿಗೆ ತೊಂದರೆಯಾಗದಂತೆ ದೈನಂದಿನ ಕಾರ್ಯ-ನಿರ್ವಹಣೆಗಾಗಿ ಅಧ್ಯಕ್ಷರು ಮತ್ತು ಉಪಾಧ್ಯಕ್ಷರು ಸ್ಥಾನಗಳಿಗೆ ಚುನಾವಣೆ ನಡೆಯುವವರೆಗೆ ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ ಕಲಂ-315ರನ್ವಯ ಆಡಳಿತಾಧಿಕಾರಿಗಳನ್ನು ನೇಮಕ ಮಾಡಲಾಗಿದೆ. |
| ಇ) | ರಾಯಚೂರು ನಗರದಲ್ಲಿರುವ ವಿವಿಧ ವಾರ್ಡ್‌ಗಳ ರಸ್ತೆಗಳನ್ನು ಅಭಿವೃದ್ಧಿ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ರಾಯಚೂರು ನಗರದಲ್ಲಿರುವ ವಿವಿಧ ವಾರ್ಡ್‌ಗಳ ರಸ್ತೆಗಳನ್ನು ಅಭಿವೃದ್ಧಿ ಮಾಡಲು ಸರ್ಕಾರವು 14ನೇ ಹಣಕಾಸು ಆಯೋಗ, ಎಸ್.ಎಫ್.ಸಿ. ಮುಕ್ತನಿಧಿ ಹಾಗೂ ಸಿ.ಎಂ.ಎಸ್.ಎಂ.ಟಿ.ಡಿ.ಪಿ/ ನಗರೋತ್ಥಾನ ಯೋಜನೆಗಳಡಿಯಲ್ಲಿ ಕ್ರಮವಹಿಸಲಾಗುತ್ತಿದೆ.<br><br>1. ***14ನೇ ಹಣಕಾಸು ಆಯೋಗದ ಅನುದಾನ:***<br><br>• 14ನೇ ಹಣಕಾಸು ಆಯೋಗದ ಅನುದಾನದಡಿ ನಗರದ ವ್ಯಾಪ್ತಿಯಲ್ಲಿರುವ ರಸ್ತೆಗಳ ಮತ್ತು ಪಾದಚಾರಿ ಮಾರ್ಗಗಳ ನಿರ್ವಹಣೆಗಾಗಿ ಆಯಾ ನಗರ ಸ್ಥಳೀಯ ಸಂಸ್ಥೆಗಳು ಆದ್ಯತೆಗೆ ಮತ್ತು ಅಗತ್ಯತೆಗೆ ಅನುಸಾರವಾಗಿ ಕ್ರಿಯಾಯೋಜನೆಯನ್ನು ತಯಾರಿಸಲು ಸರ್ಕಾರದ ಸುತ್ತೋಲೆ ಸಂಖ್ಯೆ: ನಅಇ 42 ಎಸ್.ಎಫ್.ಸಿ. 2017, ದಿನಾಂಕ 03-04-2017ರಲ್ಲಿ ಮಾರ್ಗಸೂಚಿಗಳನ್ನು ಹೊರಡಿಸಿ ಸೂಚಿಸಲಾಗಿದೆ. |

| | | |
|---|---|---|
| | | • ರಾಯಚೂರು ನಗರಸಭಾ ವ್ಯಾಪ್ತಿಯಲ್ಲಿ 14ನೇ ಹಣಕಾಸು ಆಯೋಗದ ಅನುದಾನದಡಿ 2018-19ನೇ ಸಾಲಿಗೆ ರೂ. 188.30 ಲಕ್ಷಗಳ ಮೊತ್ತದ 19 ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಂಡು ರೂ.38.00 ಲಕ್ಷಗಳ 5 ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದೆ. ರೂ.35.32 ಲಕ್ಷ ಮೊತ್ತದ 2 ಕಾಮಗಾರಿಗಳು ಪ್ರಗತಿಯಲ್ಲಿವೆ. ರೂ.118.98 ಲಕ್ಷ ಮೊತ್ತದ 12 ಕಾಮಗಾರಿಗಳು ಟೆಂಡರ್ ಪ್ರಕ್ರಿಯೆಯಲ್ಲಿವೆ.<br>• 2019-20ನೇ ಸಾಲಿನಲ್ಲಿ ರೂ. 434.00 ಲಕ್ಷ ಮೊತ್ತದ 34 ರಸ್ತೆ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಎಲ್ಲಾ ಕಾಮಗಾರಿಗಳು ಟೆಂಡರ್ ಪ್ರಕ್ರಿಯೆಯಲ್ಲಿವೆ.<br>*2. ಎಸ್.ಎಫ್.ಸಿ. ಮುಕ್ತನಿಧಿ ಅನುಧಾನ:*<br>• ಸರ್ಕಾರದ ಸುತ್ತೋಲೆ ಸಂಖ್ಯೆ: ನಅಇ 269 ಎಸ್.ಎಫ್.ಸಿ. 2015, ದಿನಾಂಕ:16-06-2015ರ ಎಸ್.ಎಫ್.ಸಿ. ಮಾರ್ಗಸೂಚಿ ಅನ್ವಯ ರಾಯಚೂರು ನಗರದಲ್ಲಿರುವ ವಿವಿಧ ವಾರ್ಡ್‌ಗಳ ರಸ್ತೆಗಳನ್ನು ಅಭಿವೃದ್ಧಿ ಮಾಡಲು ಸರ್ಕಾರದ ಸುತ್ತೋಲೆ ಸಂಖ್ಯೆ: ನಅಇ 17 ಎಸ್.ಎಫ್.ಸಿ.2017, ದಿನಾಂಕ: 09-02-2017 ರಲ್ಲಿ ಯೋಜನೆಗಳನ್ನು ಕಾರ್ಯಗತಗೊಳಿಸಲು ನಿಗಧಿಪಡಿಸಲಾದ ವೇಳಾಪಟ್ಟಿಯಂತೆ ಕಾಮಗಾರಿಗಳನ್ನು ನಿಗಧಿತ ಅವಧಿಯೊಳಗೆ ಪೂರ್ಣಗೊಳಿಸಲಾಗುತ್ತದೆ.<br>• 2017-18 ನೇ ಸಾಲಿಗೆ 09 ರಸ್ತೆ ಕಾಮಗಾರಿಗಳನ್ನು ತೆಗೆದುಕೊಂಡು ಪೂರ್ಣಗೊಳಿಸಲಾಗಿರುತ್ತದೆ. 2018-19ನೇ ಸಾಲಿಗೆ 05 ಕಾಮಗಾರಿಗಳನ್ನು ತೆಗೆದುಕೊಂಡು 4 ಕಾಮಗಾರಿಗಳು ಪೂರ್ಣಗೊಂಡು 01 ಕಾಮಗಾರಿ ಪ್ರಗತಿಯಲ್ಲಿರುತ್ತದೆ. 2019-20 ನೇ ಸಾಲಿಗೆ 16 ರಸ್ತೆ ಕಾಮಗಾರಿಗಳನ್ನು ತೆಗೆದುಕೊಳ್ಳಲಾಗಿದೆ. ಎಲ್ಲಾ ಕಾಮಗಾರಿಗಳು ಟೆಂಡರ್ ಪ್ರಕ್ರಿಯೆ ಹಂತದಲ್ಲಿರುತ್ತದೆ.<br>*3. ಸಿ.ಎಂ.ಎಸ್.ಎಂ.ಟಿ.ಡಿ.ಪಿ ನಗರೋತ್ಥಾನ- ಹಂತ-02 & 03:*<br>• ರಾಯಚೂರು ನಗರಸಭೆ ವ್ಯಾಪ್ತಿಯಲ್ಲಿ ಸಿ.ಎಂ.ಎಸ್.ಎಂ.ಟಿ.ಡಿ.ಪಿ ನಗರೋತ್ಥಾನ ಹಂತ-2ರ ಯೋಜನೆಯಡಿ ರೂ.30.00 ಕೋಟಿ ಮೊತ್ತ ಹಂಚಿಕೆಯಾಗಿದ್ದು, ಇದರಲ್ಲಿ ರೂ.24.00 ಕೋಟಿಗಳಲ್ಲಿ ರಸ್ತೆ ಅಭಿವೃದ್ಧಿಯ 12 ಕಾಮಗಾರಿಗಳನ್ನು ತೆಗೆದುಕೊಂಡು ಪೂರ್ಣಗೊಳಿಸಲಾಗಿರುತ್ತದೆ.<br>• ನಗರೋತ್ಥಾನ (ಮುನಿಸಿಪಾಲಿಟಿ)-3ನೇ ಹಂತದ ಯೋಜನೆಯಡಿ ರೂ.35.00 ಕೋಟಿ ಮೊತ್ತ ಹಂಚಿಕೆಯಾಗಿದ್ದು, ಇದರಲ್ಲಿ ರೂ.12.09 ಕೋಟಿಗಳ ಮೊತ್ತದ ರಸ್ತೆ ಅಭಿವೃದ್ಧಿಯ 19 ಕಾಮಗಾರಿಗಳನ್ನು ಕೈಗೊಂಡಿದೆ, 13 ಕಾಮಗಾರಿಗಳು ಪೂರ್ಣಗೊಂಡು, 6 ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ. |

ಕಡತ ಸಂಖ್ಯೆ: ನಅಇ 85 ಎಸ್.ಎಫ್.ಸಿ 2020

(ನಾರಾಯಣ ಗೌಡ)
ಪೌರಾಡಳಿತ ಹಾಗೂ ತೋಟಗಾರಿಗೆ ಮತ್ತು
ರೇಷ್ಮೆ ಸಚಿವರು.